# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1463 (1780).
ಸದಸ್ಯರ ಹೆಸರು : ಶ್ರೀ ಪುಟ್ಟಣ್ಣ (ಶಿಕ್ಷಕರ ಕ್ಷೇತ್ರ).
ಉತ್ತರಿಸುವ ದಿನಾಂಕ : 14-03-2022
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>1986-87ನೇ ಸಾಲಿನಿಂದ 1994-95ನೇ ಸಾಲಿನವರೆಗೆ ರಾಜ್ಯದಲ್ಲಿ ಪ್ರಾರಂಭವಾಗಿರುವ ಕನ್ನಡ ಮಾಧ್ಯಮ ಪ್ರೌಢಶಾಲೆಗಳು ಮತ್ತು ಪದವಿ ಪೂರ್ವ ಕಾಲೇಜುಗಳೆಷ್ಟು; (ವಿವರ ನೀಡುವುದು)</td><td>1986-87ನೇ ಸಾಲಿನಿಂದ 1994-95ನೇ ಸಾಲಿನವರೆಗೆ ಪ್ರಾರಂಭವಾಗಿರುವ ಕನ್ನಡ ಮಾಧ್ಯಮದ ಪ್ರೌಢ ಶಾಲೆಗಳು ಮತ್ತು ಪದವಿ ಪೂರ್ವಕಾಲೇಜುಗಳ ವಿವರ ಈ ಕೆಳಗಿನಂತಿದೆ.<br><br>ಪ್ರೌಢಶಾಲೆಗಳು: 1426<br>ಪದವಿಪೂರ್ವ ಕಾಲೇಜುಗಳು: 377</td></tr>
<tr><td>(ಆ)</td><td>ಈ ಸಾಲಿನಲ್ಲಿ ಪ್ರಾರಂಭವಾಗಿರುವ ಶಾಲಾ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಯಾವಾಗ ಸರ್ಕಾರಿ ಆದೇಶ ಹೊರಡಿಸಿದೆ; (ವಿವರ ನೀಡುವುದು)</td><td>ಸರ್ಕಾರದ ಆದೇಶ ಸಂಖ್ಯೆ: ಇಡಿ 59 ಪಿಎಂಸಿ 2006, ದಿನಾಂಕ:06/10/2007 ಮತ್ತು ಸರ್ಕಾರದ ಆದೇಶ ಸಂಖ್ಯೆ: ಇಡಿ 217 ಪಿಎಂಸಿ 2008, ದಿನಾಂಕ:08/09/2008ರಂತೆ ಖಾಸಗಿ ಅನುದಾನರಹಿತ ಪ್ರಾಥಮಿಕ ಮತ್ತು ಪ್ರೌಢಶಾಲೆ ಹಾಗೂ ಪದವಿ ಪೂರ್ವಕಾಲೇಜುಗಳನ್ನು ಸಹಾಯಾನುದಾನಕ್ಕೆ ಒಳಪಡಿಸಲು ಆದೇಶಿಸಲಾಗಿದೆ.</td></tr>
<tr><td>(ಇ)</td><td>ಈ ಅವಧಿಯಲ್ಲಿ ಪ್ರಾರಂಭವಾಗಿರುವ ಎಷ್ಟು ಶಾಲಾ ಕಾಲೇಜುಗಳನ್ನು ಇದುವರೆವಿಗೆ ವೇತನಾನುದಾನಕ್ಕೊಳಪಡಿಸಲಾಗಿದೆ; (ವಿವರ ನೀಡುವುದು)</td><td>1986-87ನೇ ಸಾಲಿನಿಂದ 1994-95ನೇ ಅವಧಿಯಲ್ಲಿ ಪ್ರಾರಂಭಗೊಂಡು ಸಹಾಯಾನುದಾನಕ್ಕೆ ಒಳಪಟ್ಟಿರುವ ಪ್ರೌಢ ಶಾಲೆಗಳು ಮತ್ತು ಪದವಿ ಪೂರ್ವ ಕಾಲೇಜುಗಳ ವಿವರ ಈ ಕೆಳಗಿನಂತಿದೆ.<br><br>ಪ್ರೌಢ ಶಾಲೆಗಳು: 1262<br>ಪದವಿ ಪೂರ್ವ ಕಾಲೇಜುಗಳು: 292</td></tr>
</table>

| | | |
|---|---|---|
| (ಈ) | ಬಾಕಿ ಉಳಿದಿರುವ ಶಾಲಾ ಕಾಲೇಜುಗಳನ್ನು ಇದುವರೆವಿಗೂ ವೇತನಾನುದಾನಕ್ಕೊಳಪಡಿಸದಿರಲು ಕಾರಣಗಳೇನು; | ಕೋವಿಡ್–19ರ ನಿಮಿತ್ತ ಸುತ್ತೋಲೆ ಸಂಖ್ಯೆ: ಆಇ 157 ವೆಚ್ಚ–8/2020, ದಿನಾಂಕ:10/06/2020 ರನ್ವಯ ಯಾವುದೇ ಹೊಸ ಅನುದಾನರಹಿತ ಶಾಲಾ ಕಾಲೇಜುಗಳನ್ನು ಸಹಾಯಾನುದಾನಕ್ಕೊಳಪಡಿಸುವಂತಿಲ್ಲ ಎಂದು ಆರ್ಥಿಕ ನಿರ್ಬಂಧವನ್ನು ವಿಧಿಸಲಾಗಿದೆ. |
| ಆ | ಯಾವ ಕಾಲಮಿತಿಯಲ್ಲಿ ವೇತನಾನುದಾನಕ್ಕೊಳಪಡಿಸಲಾಗುವುದು? | ಸರ್ಕಾರದ ಪತ್ರ ಸಂಖ್ಯೆ:ಇಪಿ 445 ಪಿಬಿಎಸ್ 2021, ದಿನಾಂಕ:19.01.02022ರಲ್ಲಿ 1995ಕ್ಕೂ ಪೂರ್ವದಲ್ಲಿ ಪ್ರಾರಂಭವಾಗಿ ಸತತವಾಗಿ ನಡೆದುಕೊಂಡು ಬಂದ ಪ್ರಾಥಮಿಕ ಮತ್ತು ಪ್ರೌಢಶಾಲೆಗಳನ್ನು ಸಹಾಯಾನುದಾನಕ್ಕೊಳಪಡಿಸುವ ಸಂಬಂಧ ಬಾಕಿ ಇರುವ ಅರ್ಹ ಪ್ರಸ್ತಾವನೆಗಳನ್ನು ದಿನಾಂಕ:31.03.2022ರ ಒಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ. |

ಸಂಖ್ಯೆ:ಇಪಿ 99 ಎಸ್‌ಇಎಸ್ 2022

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು